


# ಜ್ಯೋತಿಷ ಮಿತ್ರ

ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1276 02-03-2022 ಬುಧವಾರ

ಪ್ಲವನಾಮ ಸಂವತ್ಸರ ಉತ್ತರಾಯಣ ಶಿಶಿರಋತು ಮಾಘಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಅಮವಾಸ್ಯಾ (23:04)<br>ನಕ್ಷತ್ರ : ಶತಭಿಷಾ (26:36)<br>ರಾಹುಕಾಲ :<br>12:42 PM - 02:11 PM<br>ಗುಳಿಕಕಾಲ :<br>11:13 AM - 12:42 PM | ಯಶಸ್ಸು ಹಾಗೂ ಸಂತೋಷದ ರಹಸ್ಯ ಅಂದರೆ ನಿಸ್ವಾರ್ಥ ಮನೋಭಾವ. |




# ವಾಸ್ತು ಪ್ರಕಾರ

ಕನ್ನಡಿಯು ಯಾವುದೇ ಕೋಣೆಯ ಆಗ್ನೇಯದಲ್ಲಿದ್ದರೆ ಚರ್ಚೆ, ಅನಾವಶ್ಯಕ ಖರ್ಚು. ವಾಯುವ್ಯದಲ್ಲಿದ್ದರೆ ಮನಃಸ್ತಾಪ. ಉತ್ತರದಲ್ಲಿ ಇದ್ದರೆ ಧನಪ್ರಾಪ್ತಿ, ಈಶಾನ್ಯದಲ್ಲಿ ಇದ್ದರೆ ಮಾನ-ಸನ್ಮಾನ ಪ್ರಾಪ್ತಿ. ಪೂರ್ವದಲ್ಲಿ ಇದ್ದರೆ ಖ್ಯಾತಿ ದೊರೆಯುತ್ತದೆ. ದಕ್ಷಿಣ ಮತ್ತು ನೈಋತ್ಯದಲ್ಲಿ ಕನ್ನಡಿ ಇರಲೇ ಬಾರದು.

ಮನೆಯಲ್ಲಿ ಹೆಣ್ಣು ಮಕ್ಕಳ ವಿವಾಹವು ನಿಧಾನ ವಾಗುತ್ತಿದ್ದರೆ ನೈಋತ್ಯ ದಿಕ್ಕಿನಲ್ಲಿ ಜೋಡಿ ಪಕ್ಷಿಗಳ ಚಿತ್ರವನ್ನಾಗಲಿ, ಹತ್ತಿಯಿಂದ ಮಾಡಿದ ಗೊಂಬೆಗಳನ್ನಾಗಲಿ ಇಟ್ಟರೆ ಬೇಗನೆ ಮದುವೆಯಾಗುತ್ತದೆ.

ಈಶಾನ್ಯ ಕೋಣೆಯ ಕಿಟಕಿ-ಬಾಗಿಲನ್ನು ಯಾವಾಗಲೂ ತೆರೆದಿಟ್ಟಿರಬೇಕು. ಇಲ್ಲದೇ ಇದ್ದರೆ ದೈವೀಕೃಪೆಯು ಕ್ಷೀಣಿಸುತ್ತದೆ.

ಒಂದೇ ಸಾಲಿನಲ್ಲಿ ಬಾಗಿಲು ಇರಬಾರದು, ಹೀಗಿದ್ದರೆ ಸಂಪಾದನೆ ನಿಲ್ಲುವುದಿಲ್ಲ.

ದಂಪತಿಗಳು ಈಶಾನ್ಯ ಮೂಲೆಯ ಕೋಣೆಯಲ್ಲಿ ಮಲಗಬಾರದು. ಮಲಗಿದರೆ ಜೀವನ ಸಂಘರ್ಷದಿಂದ ಕೂಡಿರುತ್ತದೆ.

ಮನೆಯ ವಾಯುವ್ಯ ದಿಕ್ಕಿನ ಭೂಮಿಯಲ್ಲಿ ಗುಂಡಿ,ತಿಪ್ಪೆ ಅಥವಾ ತಗ್ಗು ಇರಬಾರದು. ಇದ್ದರೆ ಕೋರ್ಟ್,

ಕಛೇರಿ ಸುತ್ತಾಟ ತಪ್ಪುವುದಿಲ್ಲ. ಭಯಂಕರ ಖಾಯಿಲೆಗೆ ತುತ್ತಾಗುತ್ತಾರೆ, ಆರ್ಥಿಕ ದುಃಸ್ಥಿತಿ ಉಂಟಾಗುತ್ತದೆ.

ಆಗ್ನೇಯ ದಿಕ್ಕಿನಲ್ಲಿ ಬಾವಿ ಇದ್ದರೆ ಮೃತ್ಯು ಸಮಾನ ಕಷ್ಟಗಳುಂಟಾಗುವುದಲ್ಲದೆ ಮನೆಯಲ್ಲಿ ಯಾವಾಗಲೂ ಆಶಾಂತಿಯ ವಾತಾವರಣ ಉಂಟಾಗುತ್ತದೆ.



# ಹಣೆಯ ರೇಖೆಗಳ ಲಕ್ಷಣ

ವಿಶಾಲವಾದ ಹಣೆಯಲ್ಲಿ ಅಡ್ಡವಾಗಿ ಅಥವಾ ಉದ್ದುದ್ದವಾಗಿ ಗೆರೆಗಳು ಕಾಣಿಸಿಕೊಳ್ಳುತ್ತವೆ. ಕೆಲವರಿಗೆ ಬಾಲ್ಯದಿಂದಲೇ ಗೆರೆಗಳಿದ್ದರೆ ಸಾಮಾನ್ಯವಾಗಿ ನಲವತ್ತು ವಯಸ್ಸಿನ ನಂತರದಲ್ಲಿ ಗೆರೆಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಅವುಗಳ ಲಕ್ಷಣ ವಿಶೇಷಗಳನ್ನು ಈ ರೀತಿ ವಿಶ್ಲೇಷಿಸಿದ್ದಾರೆ.

- ಹಣೆಯಲ್ಲಿ ರೇಖೆಗಳೇ ಇಲ್ಲದಿರುವವರು ದೀರ್ಘಯುವಾಗಿ ಎಂಬತ್ತಕ್ಕಿಂತ ಹೆಚ್ಚು ವರ್ಷ ಬದುಕುತ್ತಾರೆ.
- ಹಣೆಯಲ್ಲಿ ಕೂದಲುಗಳವರೆಗೆ ಅಡ್ಡರೇಖೆಗಳಿರುವವರು ದೀರ್ಘಾಯುಷ್ಯ ಉಳ್ಳವರು, ಚಿಂತಾಗ್ರಸ್ತರಾಗಿರುವರು .
- ಹಣೆಯಲ್ಲಿ ಮೂರು ರೇಖೆಗಳನ್ನು ಹೊಂದಿದವರು ಶತಾಯುವೆನಿಸುವರು.
- ಹಣೆಯಲ್ಲಿ ನಾಲ್ಕು ಅಥವಾ ಹೆಚ್ಚು ರೇಖೆಗಳಿರುವವರು ರಾಜಯೋಗವನ್ನು ಅನುಭವಿಸುತ್ತ **90** ವರ್ಷ ಗಳಿಗಿಂತಲೂ ಹೆಚ್ಚು ವರ್ಷ ಬದುಕುವವರು, ಸುಖಿಯಾಗಿ ಇರುವರು.
- ಹಣೆಯಲ್ಲಿ ಕತ್ತರಿಸಿದಂತೆ ರೇಖೆಗಳಿರುವವರು ಕಾಮಾಸಕ್ತಿ ಹೊಂದಿದವರು, ಪರಸ್ತ್ರೀ ಆಸಕ್ತರೂ ಆಗುವರು.
- ಹಣೆಯಲ್ಲಿ ಅನೇಕ ಗೆರೆಗಳಿರುವವರು ಎಪ್ಪತ್ತು ವರ್ಷ

ಆಯುಷ್ಯ ಹೊಂದಿರುವರು.

- ಎರಡನೆಯ ಅಡ್ಡರೇಖೆಯು ಹಣೆಯಲ್ಲಿ ಉದ್ದವಾಗಿ ಕಾಣಿಸಿದರೆ ಅರುವತ್ತು ವರ್ಷ ಆಯುಷ್ಯ ಹೊಂದುವರು.
- ಹಣೆಯಲ್ಲಿ ವಕ್ರರೇಖೆಗಳಿರುವವರು ಐವತ್ತು ವರ್ಷಗಳವರೆಗೆ ಬದುಕುವರು.
- ಹಣೆಯಲ್ಲಿ ಚಿಕ್ಕ ಚಿಕ್ಕ ರೇಖೆಗಳಿರುವವರು ಅಲ್ಪಾಯುವೆನಿಸಿ ನಲುವತ್ತು ವರ್ಷಗಳವರೆಗೆ ಬದುಕುವರು.
- ಹಣೆಯಲ್ಲಿ ತ್ರಿಶೂಲಾಕೃತಿಯುಳ್ಳವರು ಸಂಪನ್ನನೆನಿಸಿ ಸಮರ್ಥನಾಯಕರಾಗಿ ದಕ್ಷ ಮತ್ತು ಶ್ರೀಮಂತರಾಗುವರು.
- ಹಣೆಯಲ್ಲಿ ತಿಲಕದಂತೆ ಸ್ವತಃ ರಚನೆಯಾಗುತ್ತಿದ್ದರೆ ಸಮಾಜದ ಗೌರವಕ್ಕೆ ಪಾತ್ರರಾಗುವರು.
- ಹಣೆಯಲ್ಲಿ ಸದಾ ರೇಖೆಗಳು ಕಾಣುವಂತಿದ್ದರೆ ಚಿಂತಾಗ್ರಸ್ತರಾಗುವರು

ಜ್ಯೋತಿಷ ಕಲಿಕಾಸಕ್ತರಿಗಾಗಿ
'ಜ್ಯೋತಿಷ ಮಿತ್ರ' ಸಂಸ್ಥೆಯು ಹೊರತಂದಿದೆ.

# 'ಜ್ಯೋತಿಷ ಫಲ ಸಂಗ್ರಹ'

ಗ್ರಂಥವನ್ನು.

(ಪಂಚಾಂಗ,
ಜಾತಕ ವಿಮರ್ಶೆ,
ಜಾತಕ ಹೊಂದಾಣಿಕೆ,
ಶುಭ ಮುಹೂರ್ತ,
ಸಂಖ್ಯಾಶಾಸ್ತ್ರ,
ಪ್ರಶ್ನಶಾಸ್ತ್ರ)




~~ರೂ.1250/-~~
ರಿಯಾಯಿತಿ ದರ
**ರೂ.750/-**
ಮಾತ್ರ

ಸಂಪರ್ಕಿಸಿ :
**9986671473 /9535283535**




**www.jyothishamithra.com**


## ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535
jmonline@gmail.com www.jyothishamithra.com